ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1411 (೧೦೧೧) |
| ಸದಸ್ಯರ ಹೆಸರು | : | ಶ್ರೀ ಕಾಂತರಾಜ್ (ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 16.03.2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಗರಾಭಿವೃದ್ಧಿ ಪ್ರಾಧಿಕಾರ ಎಂದರೇನು; ಅವು ಯಾವುವು; ಯಾವಾಗ ಸ್ಥಾಪನೆ ಮಾಡಲಾಗಿದೆ: ಅದರ ಉದ್ದೇಶಗಳೇನು; ರಾಜ್ಯದಲ್ಲಿರುವ ನಗರಾಭಿವೃದ್ಧಿ ಪ್ರಾಧಿಕಾರಗಳಾವುವು; | • ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987 ರನ್ವಯ ಪ್ರಾಧಿಕಾರಗಳನ್ನು ಸೃಜಿಸಲಾಗುತ್ತದೆ. ಅಂತಹ ಪ್ರಾಧಿಕಾರಗಳು ನಗರಾಭಿವೃದ್ಧಿ ಪ್ರಾಧಿಕಾರಗಳೆಂದು ಕರೆಯಲ್ಪಡುತ್ತವೆ.<br>• ರಾಜ್ಯದಲ್ಲಿ ಒಟ್ಟು 31 ನಗರಾಭಿವೃದ್ಧಿ ಪ್ರಾಧಿಕಾರಗಳಿದ್ದು, ಅವುಗಳ ವಿವರಗಳನ್ನು ಅನುಬಂಧ-01 ರಲ್ಲಿ ಒದಗಿಸಿದೆ.<br>• ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987 ರ ಪ್ರಕರಣ 14 ರಲ್ಲಿ ಪ್ರಾಧಿಕಾರಗಳ ಉದ್ದೇಶಗಳು ನಗರ ಪ್ರದೇಶಗಳ ಅಭಿವೃದ್ಧಿಯನ್ನು ಯೋಜಿಸುವುದು, ಉತ್ತೇಜಿಸುವುದು ಮತ್ತು ಸಂರಕ್ಷಿಸುವುದು ಮತ್ತು ಈ ಉದ್ದೇಶಗಳಿಗಾಗಿ ಪ್ರಾಧಿಕಾರವು ತನ್ನ ವ್ಯಾಪ್ತಿಯಲ್ಲಿರುವ ನಗರ ಪ್ರದೇಶದ ಅಥವಾ ನಗರ ಪ್ರದೇಶದ ಹೊರಗಿರುವ ಯಾವುದೇ ಚರ ಹಾಗೂ ಸ್ಥಿರಾಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವ, ಹೊಂದುವ, ನಿರ್ವಹಣೆ ಮಾಡುವ ಮತ್ತು ವಿಲೇವಾರಿ ಮಾಡುವ ಮತ್ತುಕಟ್ಟಡಗಳ ನಿರ್ಮಾಣ ಮತ್ತು ಇಂಜಿನಿಯರಿಂಗ್ ಕಾಮಗಾರಿಗಳು ಮತ್ತಿತರ ಕಾಮಗಾರಿಗಳಿಗೆ ಮತ್ತು ಸಾಮಾನ್ಯವಾಗಿ ಅಭಿವೃದ್ಧಿಗಾಗಿ ಅವಶ್ಯವಿರುವ ಎಲ್ಲಾ ಅಗತ್ಯವಾದ ಮತ್ತು ಸೂಕ್ತವಾದ ಮತ್ತು ಅದರ ಇತರ ಪ್ರಾಸಂಗಿಕ ಉದ್ದೇಶಗಳಿಗಾಗಿ ಅಧಿಕಾರವನ್ನು ನೀಡಿರುತ್ತದೆ. |
| ಆ) | ಸದರಿ ನಗರಾಭಿವೃದ್ಧಿ ಪ್ರಾಧಿಕಾರಗಳು ಯಾವ-ಯಾವ ಉದ್ದೇಶಗಳಿಗಾಗಿ ಜಮೀನನ್ನು ಸ್ವಾಧೀನಪಡಿಸಿಕೊಂಡು ಅಭಿವೃದ್ಧಿಮಾಡಿ ಹಸ್ತಾಂತರಿಸಲು ಅಧಿಕಾರ ಹೊಂದಿದೆ; (ವಿವರವಾಗಿ ಉದ್ದೇಶವಾರು ಮಾಹಿತಿ ನೀಡುವುದು) | ಪ್ರಾಧಿಕಾರವು ಸರ್ಕಾರದ ಪೂರ್ವಾನುಮತಿಯೊಂದಿಗೆ ಪ್ರಾಧಿಕಾರದ ವ್ಯಾಪ್ತಿಯೊಳಗೆ ಯಾವುದೇ ಪ್ರದೇಶದ ಅಭಿವೃದ್ಧಿ ಅವಶ್ಯಕತೆ ಅಥವಾ ಅಪೇಕ್ಷಣೀಯ ಎಂದು ಪರಿಗಣಿಸುವಂತಹ ಕಾಮಗಾರಿಗಳನ್ನು ಕೈಗೊಳ್ಳಲು, ವಸತಿ ಹಾಗೂ ವಸತಿಯೇತರ ಯೋಜನೆಗಳಿಗೆ ಕಾಯ್ದೆಯನ್ವಯ ಜಮೀನನ್ನು ಸ್ವಾಧೀನಪಡಿಸಿಕೊಂಡು ಅಭಿವೃದ್ಧಿ ಮಾಡಲು ಅಧಿಕಾರ ಹೊಂದಿದೆ. |

| | | |
|---|---|---|
| ಇ) | ತುಮಕೂರು ಜಿಲ್ಲೆಯಲ್ಲಿ ನಗರಾಭಿವೃದ್ಧಿ ಪ್ರಾಧಿಕಾರ ಇದೆಯೇ; ಹಾಗಿದ್ದಲ್ಲಿ, ಸದರಿ ಪ್ರಾಧಿಕಾರದಿಂದ ಕಳೆದ 15 ವರ್ಷಗಳಲ್ಲಿ ಯಾವ ಯಾವ ಬಡಾವಣೆ ನಿರ್ಮಿಸಲಾಗಿದೆ; ಎಷ್ಟು ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ; ಉಳಿದ ನಿವೇಶನಗಳೆಷ್ಟು; (ವಿವರವಾದ ಮಾಹಿತಿ ನೀಡುವುದು) | ದಿನಾಂಕ 02.06.1988 ರಿಂದ ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ಅಸ್ತಿತ್ವಕ್ಕೆ ಬಂದಿದ್ದು, ಸದರಿ ದಿನಾಂಕದಿಂದಲೂ ಕಾರ್ಯನಿರ್ವಹಿಸುತ್ತಿರುತ್ತದೆ.<br>ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಕಳೆದ 15 ವರ್ಷಗಳಲ್ಲಿ ಮೂರು ವಸತಿ ಬಡಾವಣೆಗಳನ್ನು ನಿರ್ಮಿಸಲಾಗಿದ್ದು, ಅದರಲ್ಲಿ ಮಧ್ಯಮ/ಮೂಲೆ ಮತ್ತು ವಾಣಿಜ್ಯ ನಿವೇಶನಗಳನ್ನು ಒಳಗೊಂಡಂತೆ ಒಟ್ಟು 2386 ನಿವೇಶನಗಳನ್ನು ರಚಿಸಲಾಗಿದೆ. ಈ ಪೈಕಿ 2047 ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ. 241 ನಿವೇಶನಗಳು ಹಂಚಿಕೆಗೆ ಬಾಕಿ ಇರುತ್ತವೆ. (ವಿವರಗಳನ್ನು ಅನುಬಂಧ-02 ರಲ್ಲಿ ಒದಗಿಸಿದೆ). |
| ಈ) | ತುಮಕೂರು ನಗರದ ಅಮಾನಿಕೆರೆಯನ್ನು ಸದರಿ ಪ್ರಾಧಿಕಾರ ನಿರ್ವಹಣೆ ಮಾಡುತ್ತಿದೆಯೇ; ನಿರ್ವಹಣೆಗಾಗಿ ಇಲ್ಲಿಯವರೆಗೂ ಮಾಡಿದ ಖರ್ಚು ಎಷ್ಟು? (ವಿವರವಾಗಿ ಮಾಹಿತಿ ನೀಡುವುದು) | ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ಅಮಾನಿಕೆರೆಯನ್ನು 2007-08 ನೇ ಸಾಲಿನಿಂದ ನಿರ್ವಹಣೆ ಮಾಡುತ್ತಿದ್ದು, 2007-08 ರಿಂದ 2019-20 ರವರೆಗೂ ಒಟ್ಟು ರೂ. 8,38,00,796/-ಗಳನ್ನು ಖರ್ಚು ಮಾಡಲಾಗಿರುತ್ತದೆ,. (ವಿವರಗಳನ್ನು ಅನುಬಂಧ-03 ರಲ್ಲಿ ಒದಗಿಸಿದೆ). |

ಸಂಖ್ಯೆ: ನಅಇ 13 ಎಲ್‌ಸಿಕ್ಯೂ 2021(ಇ-ಕಡತ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

## ಅನುಬಂಧ -01

| ಕ್ರ.ಸಂ. | ನಗರಾಭಿವೃದ್ಧಿ ಪ್ರಾಧಿಕಾರದ ಹೆಸರು | ಪ್ರಾಧಿಕಾರ ಸ್ಥಾಪನೆಯಾದ ದಿನಾಂಕ |
|---|---|---|
| 1. | ಬಾಗಲಕೋಟೆ | 27-07-2020 |
| 2. | ಬೆಳಗಾವಿ | 27-05-1988 |
| 3. | ಬಳ್ಳಾರಿ | 02-06-1988 |
| 4. | ಬೀದರ್ | 25-03-1988 |
| 5. | ವಿಜಯಪುರ | 02-06-1988 |
| 6. | ಚಾಮರಾಜನಗರ-ರಾಮಸಮುದ್ರ | 24-04-1998 |
| 7. | ಚಿಕ್ಕಮಗಳೂರು | 02-06-1988 |
| 8. | ಚಿತ್ರದುರ್ಗ | 01-05-1988 |
| 9. | ಚಿಕ್ಕಬಳ್ಳಾಪುರ | 09-02-2015 |
| 10. | ದಾವಣಗೆರೆ-ಹರಿಹರ | 01-05-1988 |
| 11. | ಗದಗ-ಬೆಟಗೇರಿ | 24-04-1998 |
| 12. | ಕಲಬುರಗಿ | 22-12-1987 |
| 13. | ಹಾಸನ | 05-06-1988 |
| 14. | ಹಾವೇರಿ | 24-04-1998 |
| 15. | ಹೊಸಪೇಟೆ | 21-05-1996 |
| 16. | ಹುಬ್ಬಳ್ಳಿ-ಧಾರವಾಡ | 22-12-1987 |
| 17. | ಕಾರವಾರ | 16-05-1988 |
| 18. | ಕೆ.ಜಿ.ಎಫ್ | 02-06-1998 |
| 19. | ಕೋಲಾರ | 02-05-1988 |
| 20. | ಕೊಪ್ಪಳ | 24-04-1998 |
| 21. | ಮಡಿಕೇರಿ | 02-06-1988 |
| 22. | ಮಂಡ್ಯ | 02-06-1988 |
| 23. | ಮಂಗಳೂರು | 16-05-1988 |
| 24. | ಮೈಸೂರು | 16-05-1988 |
| 25. | ರಾಯಚೂರು | 02-06-1988 |
| 26. | ರಾಮನಗರ | 30-11-1995 |
| 27. | ಶಿವಮೊಗ್ಗ | 02-06-1988 |
| 28. | ತುಮಕೂರು | 02-06-1988 |
| 29. | ಉಡುಪಿ-ಮಲ್ಪೆ | 24-04-1998 |
| 30. | ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ | 02-06-1988 |
| 31. | ಯಾದಗಿರಿ | 09-02-2015 |

ಅನುಬಂಧ- ೨

## ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಅಭಿವೃದ್ಧಿ ಪಡಿಸಿದ ಬಡಾವಣೆಗಳಲ್ಲಿ ಇರುವ ನಿವೇಶನಗಳ ವಿವರ

| ಕ್ರ. ಸಂ | ಬಡಾವಣೆ ಹೆಸರು /ರಚಿಸಿದ ದಿನಾಂಕ | ವಸತಿ ಬಡಾವಣೆಯಲ್ಲಿ ರಚಿಸಿರುವ ನಿವೇಶನಗಳು | | | ಒಟ್ಟು ನಿವೇಶನಗಳು | ವಸತಿ ಬಡಾವಣೆಯಲ್ಲಿ ಹಂಚಿಕೆ ಮಾಡಿರುವ ನಿವೇಶನಗಳು | | | ಒಟ್ಟು ನಿವೇಶನಗಳು | ವಸತಿ ಬಡಾವಣೆಯಲ್ಲಿ ಉಳಿಕೆ ನಿವೇಶನಗಳು | | | | ಒಟ್ಟು ನಿವೇಶನಗಳು |
|---|---|---|---|---|---|---|---|---|---|---|---|---|---|---|
| | | ಮಧ್ಯಮ | ಮೂಲೆ | ವಾಣಿಜ್ಯ | | ಮಧ್ಯಮ | ಮೂಲೆ | ವಾಣಿಜ್ಯ | | ಮಧ್ಯಮ | ಮೂಲೆ | ವಾಣಿಜ್ಯ | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | | 14 |
| 1 | ಮಳೇಕೋಟೆ- ವೀರಸಾಗರ | 1451 | 334 | 36 | 1821 | 1211 | 287 | - | 1498 | 27 | 162 | 36 | ನ್ಯಾಯಾಲಯದ ತಡೆಯಾಜ್ಞೆ / ಅನ್ಯ ತಕರಾರುಗಳು ಇರುವುದರಿಂದ 98 ನಿವೇಶನಗಳು ಬಾಕಿ ಇರುತ್ತವೆ. | 225 |
| 2 | ಕ್ಯಾತ್ಸಂದ್ರ | 217 | 66 | - | 283 | 205 | 64 | - | 269 | 11 | 3 | - | | 14 |
| 3 | ಶೆಟ್ಟಿಹಳ್ಳಿ | 211 | 71 | | 282 | 213 | 67 | - | 280 | 2 | - | - | | 2 |
| | ಒಟ್ಟು ನಿವೇಶನಗಳು | 1879 | 471 | 36 | 2386 | 1629 | 418 | [illegible] | 2047 | 40 | 165 | 36 | | 241 |

ಆಯುಕ್ತರು [illegible]

ಅನುಬಂಧ - ೫

ತುಮಕೂರು ಅಮಾನಿಕೆರೆ ಸಮಗ್ರ ಅಭಿವೃದ್ಧಿಗಾಗಿ
ಪ್ರಾಧಿಕಾರದ ನಿಧಿಯಿಂದ ಖರ್ಚು ಮಾಡಿರುವ ವಿವರಗಳು

| ಕ್ರ.ಸಂ | ಸಾಲು | ಮೊತ್ತ |
|---|---|---|
| 1 | 2007-08 | 1080121 |
| 2 | 2008-09 | 523992 |
| 3 | 2009-10 | 1591621 |
| 4 | 2010-11 | 4337052 |
| 5 | 2011-12 | 3317338 |
| 6 | 2012-13 | 31033485 |
| 7 | 2013-14 | 2208868 |
| 8 | 2014-15 | 3470976 |
| 9 | 2015-16 | 4380611 |
| 10 | 2016-17 | 5320119 |
| 11 | 2017-18 | 10664471 |
| 12 | 2018-19 | 7313145 |
| 13 | 2019-20 | 8558997 |
| Total | | 83800796 |

ಆಯುಕ್ತರು
ನಗರಾಭಿವೃದ್ಧಿ ಪ್ರಾಧಿಕಾರ,
ತುಮಕೂರು.